


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 05-03-2021 ಪ್ರಶ್ನೆ ಸಂಖ್ಯೆ : 629 (641)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಹೆಚ್.ಎಂ. ರಮೇಶಗೌಡ(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 05-03-2021

ಉತ್ತರಿಸುವ ಸಚಿವರು: ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ವಿಷಯ : ತೋಟಗಾರಿಕಾ ಇಲಾಖೆಯಿಂದ ನೀಡಿರುವ ಪ್ರೋತ್ಸಾಹಧನ ಕುರಿತು

(ಅ) ಕಳೆದ ಮೂರು ವರ್ಷಗಳಿಂದ ತೋಟಗಾರಿಕೆ ಇಲಾಖೆಯಡಿ ಅಡಿಕೆ, ತೆಂಗು, ಬಾಳೆ, ಗೇರು ಮುಂತಾದ ತೋಟಗಾರಿಕೆ ಬೆಳೆಗಳಿಗೆ ಸರ್ಕಾರದಿಂದ ಮಂಜೂರಾದ ಪ್ರೋತ್ಸಾಹಧನ ಎಷ್ಟು ; (ಫಲಾನುಭವಿಗಳ ಪಟ್ಟಿ ನೀಡುವುದು)

(ಆ) ಪ್ರಸಕ್ತ ವರ್ಷ ಗೇರು ಬೆಳೆ ಇಳುವರಿಯಲ್ಲಿ ತೀವ್ರ ಕುಸಿತ ಕಂಡುಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ ; (ವಿವರ ನೀಡುವುದು)

(ಇ) ಕಾಳು ಮೆಣಸಿನ ಧಾರಣೆಯಲ್ಲಿ ಕುಸಿತ ಕಂಡು ಬಂದಿದ್ದು ರೈತರ ಸಂಕಷ್ಟಕ್ಕೆ ಕಾರಣವಾಗಿರುವ ಸಂಗತಿ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಈ ಬಗ್ಗೆ ಯಾವ ಕ್ರಮ ಕೈಗೊಂಡಿದೆ ; (ಮಾಹಿತಿ ನೀಡುವುದು)

(ಈ) ದಾಳಿಂಬೆ, ಪಪ್ಪಾಯ, ದ್ರಾಕ್ಷಿ, ಮಾವು, ಹಲಸು ಮುಂತಾದ ಸಾಂಪ್ರದಾಯಿಕ ಹಣ್ಣುಗಳ ಬಲವರ್ಧನೆಗೆ ಸರ್ಕಾರ ಕೈಗೊಂಡ ಕ್ರಮಗಳೇನು ; (ವಿವರ ನೀಡುವುದು)

(ಉ) ರಬ್ಬರ್, ಅಡಿಕೆ ಹಾಗೂ ಇತರೆ ವಾಣಿಜ್ಯ ಬೆಳೆಗಳ ಪುನಶ್ಚೇತನ ಯೋಜನೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ ? (ವಿವರ ನೀಡುವುದು)